# ಮುಂಜಾವು

**ವಾರಪತ್ರಿಕೆ.**

**ಸಂಪಾದಕ: ಸಿರಿಮನೆ ನಾಗರಾಜ್**

ರಿಜಿಸ್ಟರ್ಡ್ ನಂ. ಕೆಆರ್‌ಎನ್ ಎಸ್ — ೧೯





ಸಂಪುಟ ೧ ಸಂಚಿಕೆ ೪೩ | ಭಾನುವಾರ | ೧೯-೬-೧೯೮೩ | ಕೊಪ್ಪ | ಬೆಲೆ ೪೦ ಪೈಸೆ


## ಹರಿಜನ-ಗಿರಿಜನರಿಗೆ ದರ್ಖಾಸ್ತು ಕಡತ ತಯಾರಿ

ಬಿಳಲುಕೊಪ್ಪ: ಅತ್ತಿಕುಡಿಗೆ ಗ್ರಾಮ ಪಂಚಾಯ್ತಿ ವ್ಯಾಪ್ತಿಯಲ್ಲಿ ಭೂರಹಿತ ಹರಿಜನ-ಗಿರಿಜನರನ್ನು ಗುರ್ತಿಸಿ, ಅವರಿಗೆ ದರ್ಖಾಸ್ತು ಕಡತಗಳನ್ನು ತಯಾರಿಸುವ ಕೆಲಸ ಜೂನ್ ೧೪ ರಂದು ನಡೆಯಿತು. ೧೬೩ ಜನರಿಗೆ ಒಟ್ಟು ೬೭೨ ಎಕರೆ ಭೂಮಿಗಾಗಿ ಕಡತಗಳನ್ನು ತಯಾರಿಸಿ ಮೇಲ್ಪಟ್ಟ ಅಧಿಕಾರಿಗಳಿಗೆ ಮಂಜೂರಾತಿಗಾಗಿ ಕಳಿಸಲಾಯಿತೆಂದು ಗ್ರಾಮಾಧ್ಯಕ್ಷ ಬಿ. ಎಲ್. ವಾಸುದೇವಮೂರ್ತಿ ತಿಳಿಸಿದ್ದಾರೆ.

## ಕ್ಷೇತ್ರದಲ್ಲಿ ಜಿಲ್ಲಾ ಮಂತ್ರಿ ಜೀವಿಜಯ ಪ್ರವಾಸ

**ಕೊಪ್ಪ: ರಾಜ್ಯದ ಅರಣ್ಯ ಮಂತ್ರಿ ಹಾಗೂ ಚಿಕ್ಕಮಗಳೂರು ಜಿಲ್ಲೆಯ ಅಭಿವೃದ್ಧಿಯ ಹೊಣೆ ಹೊತ್ತಿರುವ ಜೀವಿಜಯ ಅವರು ಜೂನ್ ೧೧ ಮತ್ತು ೧೨ರಂದು ಶೃಂಗೇರಿ ಕ್ಷೇತ್ರದಲ್ಲಿ ಪ್ರವಾಸ ಮಾಡಿದರು.**

ಕೊಪ್ಪದಲ್ಲಿ ಪಕ್ಷದ ಕಾರ್ಯಕರ್ತರ ಸಭೆಯಲ್ಲಿ ಭಾಗವಹಿಸಿ, ಸಾರ್ವಜನಿಕರ ಅಹವಾಲು ಕೇಳಿ, ರೈತಸಂಘದವರ ವಾದಗಳನ್ನು (ಸಮಸ್ಯೆಗಳ ಬಗ್ಗೆ) ಕೇಳಿ ನಂತರ ತಾ|| ನ ಅಧಿಕಾರಿಗಳ ಜೊತೆ ಸಮಾಲೋಚನೆ ನಡೆಸಿದರು. ಅನಂತರ ಹರಿಹರಪುರ ಬಳಿಯ ಅರಣ್ಯ ಇಲಾಖೆ ನರ್ಸರಿಗೆ ಭೇಟಿ ಕೊಟ್ಟರು. ಅರಣ್ಯ ಇಲಾಖೆ ಲಿಪಿಕ ನೌಕರರ ಸಂಘದವರು ತಮ್ಮ ಮಂತ್ರಿಗಳನ್ನು ಭೇಟಿ ಮಾಡಿ, ಸುಮಾರು ೨೦ ವರ್ಷಗಳಿಂದಲೂ ಎರಡನೇ ದರ್ಜೆ ಗುಮಾಸ್ತರಾಗಿಯೇ ಇರುವ ನೌಕರರನ್ನು, ಇಲಾಖೆಯಲ್ಲಿ ಖಾಲಿ ಇರುವ ಸುಮಾರು ೨೦೦ ಮೇಲ್ಪಟ್ಟ ಹುದ್ದೆಗಳಿಗೆ ನೇಮಕ ಮಾಡಬೇಕೆಂದು ಒತ್ತಾಯಿಸಿದರು.

ಶೃಂಗೇರಿಯಲ್ಲಿ ತಾ.ಅ. ಮಂಡಳಿ ರಾ. ಗ್ರಾ. ಉ. ಯೋಜನೆಯಲ್ಲಿ ೬೦ ಸಾವಿರ ರೂ. ವೆಚ್ಚದಲ್ಲಿ ಕಟ್ಟಿಸಿರುವ ಗೋದಾಮಿನ ಕಟ್ಟಡದ ಉದ್ಘಾಟನೆ ಮಾಡಿದ ಸಚಿವರು ನೆಮ್ಮಾರು ಬಳಿಯ ಸಸ್ಯಕ್ಷೇತ್ರಕ್ಕೂ ಭೇಟಿ ಕೊಟ್ಟಿದ್ದರು. ಶಾಸಕ ಗೋವಿಂದಗೌಡರೂ ಮಂತ್ರಿಗಳ ಜೊತೆ ಪ್ರವಾಸ ಮಾಡಿದರು.

## ದಯಾನಂದ ಕಲ್ಲೆ ಪ್ರದೇಶ ಜನತಾ ಪಕ್ಷದ ಸಂಘಟನಾ ಕಾರ್ಯದರ್ಶಿ

ಕೊಪ್ಪ: ಮಾಜಿ ಶಾಸಕ ಆರ್. ದಯಾನಂದ ಕಲ್ಲೆ ಅವರು ಕರ್ನಾಟಕ ಪ್ರದೇಶ ಜನತಾ ಪಕ್ಷದ ಸಂಘಟನಾ ಕಾರ್ಯದರ್ಶಿಯಾಗಿ ಆಯ್ಕೆಯಾಗಿದ್ದಾರೆ. ಅವರು ಇಲ್ಲಿಗೆ ಸಮೀಪದ ಕುದುರೆಗುಂಡಿಯವರಾಗಿದ್ದು ವೃತ್ತಿಯಲ್ಲಿ ಕಾಫಿ ಬೆಳೆಗಾರರಾಗಿದ್ದಾರೆ.

## ಆಲ್ದೂರಲ್ಲಿ ಕಳ್ಳಸಾಗಣೆ ಆಗುತ್ತಿದ್ದ ಗಂಧ ವಶ

ಕೊಪ್ಪ: ಜೂನ್ ೮ರ ರಾತ್ರಿ ೮ ಗಂಟೆ ಹೊತ್ತಿಗೆ ಆಲ್ದೂರಿನ ಮೂಲಕ ಚಿಕ್ಕಮಗಳೂರು ಕಡೆಗೆ ಕಳ್ಳಸಾಗಣೆಯಾಗುತ್ತಿದ್ದ ಒಂದು ಜೀಪು ಭರ್ತಿ ಗಂಧದ ತುಂಡುಗಳನ್ನು ಆಲ್ದೂರು ಸೆಕ್ಷನ್ನಿನ ಗಾರ್ಡ್ ಮತ್ತು ಫಾರೆಸ್ಟರ್‌ಗಳು ಸ್ಥಳೀಯರ ನೆರವಿನಿಂದ ಹಿಡಿದಿದ್ದಾರೆ. ಎಂ.ವೈ.ಐ ೫೩೬ ನಂಬರಿನ ಜೀಪನ್ನು ಅಲ್ಲಿಯೇ ಬಿಟ್ಟು ಕಳ್ಳರು ತಪ್ಪಿಸಿಕೊಂಡಿದ್ದಾರೆ. ೪೫೩ ಕಿಲೋ ಗಂಧವಿದ್ದು ಅದರ ಬೆಲೆ ಸುಮಾರು ೩೦ ಸಾವಿರ ರೂ. ಗಳಷ್ಟಾಗುತ್ತದೆಂದು ತಿಳಿದುಬಂದಿದೆ. ಜೀಪಿನ ಆಸನದ ತಳಭಾಗದಲ್ಲಿ ವಿಶೇಷವಾಗಿ ಹೆಚ್ಚುವರಿ ಪೆಟ್ರೋಲ್ ಟ್ಯಾಂಕ್ ಒಂದನ್ನು ನಿರ್ಮಿಸಿದ್ದು, ಇದು ಕಳ್ಳಸಾಗಣೆಗಾಗಿಯೇ ಬಳಕೆಯಾಗುತ್ತಿದ್ದ ಜೀಪು ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತಿತ್ತು.

## ಸೊಪ್ಪಿನಬೆಟ್ಟದಲ್ಲಿ ಕೃತಕ ಅರಣ್ಯ ಬೆಳೆಸಲು ಗ್ರಾಮಸ್ಥರ ವಿರೋಧ, ಶಾಸಕರಿಗೆ ದೂರು

ಅಡ್ಡಗದ್ದೆ: ಇಲ್ಲಿಗೆ ಸಮೀಪದ ಕಮ್ಮಾರಳ್ಳಿ, ಚಿತ್ರವಳ್ಳಿ ಮತ್ತು ಅಬ್ಬಿ ಸುತ್ತಮುತ್ತ ಸ.ನಂ. ೧೫೭ ರ ವ್ಯಾಪ್ತಿಯಲ್ಲಿ ರೈತರು ಬೆಳೆಸಿಕೊಂಡಿರುವ ದಟ್ಟವಾದ ಒಳಹಾಡ್ಯದಲ್ಲಿ ಅರಣ್ಯ ಇಲಾಖೆಯವರು ಕೃತಕ ಅರಣ್ಯ ಬೆಳೆಸಲು ನಡೆಸುತ್ತಿರುವ ಕಾಮಗಾರಿಗಳಿಗೆ ಅಲ್ಲಿನ ಗ್ರಾಮಸ್ಥರು ತೀವ್ರ ವಿರೋಧ ವ್ಯಕ್ತಪಡಿಸಿದ್ದಾರೆ.

ಈ ಪ್ರದೇಶ ಸೊಪ್ಪಿನ ಬೆಟ್ಟವಾಗಿದ್ದು, ಸುಮಾರು ೨೦ ಕುಟುಂಬಗಳ ೪೦ ಎಕರೆ ತರಿ, ೧೫ ಎಕರೆ ಬಾಗಾಯ್ತು ಜಮೀನುಗಳು ಹಾಗೂ ೩೦೦ ಜಾನುವಾರುಗಳು ಇದನ್ನು ಅವಲಂಬಿಸಿವೆಯೆಂದಿರುವ ಗ್ರಾಮಸ್ಥರು, ಇದನ್ನು ಬಿಟ್ಟು ಸುತ್ತಮುತ್ತ ಇರುವ ಬಯಲು ಪ್ರದೇಶದಲ್ಲಿ ಇಲಾಖೆ ಕೃತಕ ಅರಣ್ಯ ಬೆಳೆಸಲೆಂದಿದ್ದಾರೆ.

ಈ ಬಗ್ಗೆ ಅವರುಗಳು ಶೃಂಗೇರಿ ವಲಯ ಅರಣ್ಯಾಧಿಕಾರಿ, ಕೊಪ್ಪ ತಹಸೀಲ್ದಾರ್ ಹಾಗೂ ಶಾಸಕರಿಗೆ ಮನವಿಗಳನ್ನು ಸಲ್ಲಿಸಿದ್ದು, ಗ್ರಾಮಸ್ಥರಿಗೆ ತೊಂದರೆಯಾಗದಂತೆ ನೋಡಿಕೊಳ್ಳಲು ಡಿಎಫ್‌ಓ ಅವರಿಗೆ ತಾವು ತಿಳಿಸಿರುವುದಾಗಿ ಶಾಸಕರು ತಮಗೆ ಭರವಸೆ ಕೊಟ್ಟಿದ್ದಾರೆಂದೂ, ತಹಸೀಲ್ದಾರ್ ಮತ್ತು ಅರಣ್ಯಾಧಿಕಾರಿಗಳಿಂದ ತಮಗೇನೂ ಉತ್ತರ ಬಂದಿಲ್ಲವೆಂದೂ ಗ್ರಾಮಸ್ಥರು ತಿಳಿಸಿದ್ದಾರೆ.

ಈ ಕಾಮಗಾರಿಯಿಂದ ರೈತರಿಗೇನೂ ಬಾಧಕವಾಗುದಿವುದಿಲ್ಲವೆಂದು ಇಲಾಖೆಯ ಸ್ಥಳೀಯ ಸಿಬ್ಬಂದಿ ಹೇಳಿದ್ದರೂ, ತಾವು ಚೆನ್ನಾಗಿಯೇ ಬೆಳೆಸಿಕೊಂಡಿರುವ, ತಮ್ಮ ಜಮೀನುಗಳಿಗೆ ಅತಿ ಅನುಕೂಲ್ಯವಾದ ಈ ಹಾಡ್ಯದೊಳಗೆ ಮುಂದೆ ತಮ್ಮ 'ಹಕ್ಕಿಗೆ' ಚ್ಯುತಿ ಬರಬಹುದೆಂಬ ಸಹಜ ಭಯ ಗ್ರಾಮಸ್ಥರನ್ನು ಆವರಿಸಿದೆಯೆಂದು ಹೇಳಲಾಗಿದೆ.

## ಜಯಪುರ: ಯಾರು ಅಸಲಿ ಶೇಕ್‌ದಾರ?

ಕೊಪ್ಪ: ಸುಮಾರು ಒಂದು ತಿಂಗಳಿಂದೀಚೆಗೆ ಮೇಗುಂದಾ ಹೋಬಳಿಯಲ್ಲಿ ಇಬ್ಬರು ರಾಜಸ್ವ ನಿರೀಕ್ಷಕರು ರಾಜ್ಯಭಾರ ಮಾಡುತ್ತಿದ್ದಾರಂತೆ. ಹಿಂದಿನ ರಾ. ನಿ. ಸುಬ್ಬಾಶಾಸ್ತ್ರಿಯವರಿಗೆ ವರ್ಗವಾಗಿದ್ದು ಅವರು ಯಾವುದೋ ಕೋರ್ಟ್ ಆರ್ಡರ್ ಆಧಾರದ ಮೇಲೆ ಪುನಃ ಅಲ್ಲಿಗೇ ಬಂದಿದ್ದಾರಂತೆ. ಅವರ ಸ್ಥಾನಕ್ಕೆ ಬಂದಿದ್ದ ಇನ್ನೊಬ್ಬರೂ ಅಲ್ಲೇ ಇದ್ದಾರಂತೆ. ಇಬ್ಬರೂ ಜನರ ಹತ್ತಿರ "ಏ, ನಾನೇ ಕಣಯ್ಯ ಶೇಕ್‌ದಾರ" ಎನ್ನುತ್ತ 'ಕೆಲಸ' ಮಾಡುತ್ತಿದ್ದಾರಂತೆ. ಇಬ್ಬರಲ್ಲಿ ಒಬ್ಬರನ್ನು ಉಳಿಸಿ ಇನ್ನೊಬ್ಬರನ್ನು ಬದಲಾಯಿಸುವುದು ಕೊಪ್ಪ ತಾಸೀಲ್ದಾರರ ವ್ಯಾಪ್ತಿಗೆ ಮೀರಿದ್ದಂತೆ. ಅಂತೂ ಇದರಲ್ಲಿ ಯಾರು 'ಅಸಲಿ' ಅಂತ ಜನರು ಗೊಂದಲಕ್ಕೆ ಸಿಕ್ಕಿದ್ದಾರಂತೆ.

"ಕೆಲಸದ ಸಮಯದಲ್ಲೆ ಗಳಿಕೆ" ಯೋಜನೆ ಯಿಲ್ಲದೆ ಬರೀ ಕೆಲಸ ಮಾತ್ರ ಆಗಿದ್ದರೆ ಈ ಹಕ್ಕು ಸ್ಥಾಪನೆ ಪ್ರಶ್ನೆ ಇಷ್ಟು ಬಿಗಿಯಾಗಿರುತ್ತಿರಲಿಲ್ಲ ವೆಂದು ಜನ ಹೇಳುತ್ತಾರೆ.

## ಶೃಂಗೇರಿ ತಹಸೀಲ್ದಾರ್ ವರ್ಗಾವಣೆ

ಶೃಂಗೇರಿ: ಇಲ್ಲಿ ತಹಸೀಲ್ದಾರ್ ಆಗಿದ್ದ ಜಿ. ಅನಂತರಾಮ್ ಅವರಿಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರಕ್ಕೆ ವರ್ಗವಾಗಿದ್ದು, ಅಲ್ಲಿನ ತಹಸೀಲ್ದಾರ್ ಎಸ್. ಎಸ್. ಪಾಟೀಲ್ ಇಲ್ಲಿಗೆ ನೇಮಕವಾಗಿದ್ದಾರೆ.

## ಜನತಾ ಪಕ್ಷದಿಂದ 'ಜಾಗೃತಾದಳ' ರಚನೆ

ಕೊಪ್ಪ: ಶೃಂಗೇರಿ, ಕೊಪ್ಪ, ನ. ರಾ. ಪುರ ತಾ||ಗಳ ಮಟ್ಟದಲ್ಲಿ ಅಧಿಕಾರಿಗಳು, ರಾಜಕಾರಣಿಗಳು ಮತ್ತು ವರ್ತಕರಲ್ಲಿ ಅಕ್ರಮ ವ್ಯವಹಾರಗಳನ್ನು ಪತ್ತೆ ಹಚ್ಚಿ, ಅದನ್ನು ತಡೆಗಟ್ಟುವ ಸಲುವಾಗಿ ಜನತಾ ಪಕ್ಷದ 'ಜಾಗೃತಾ ದಳ' ರಚಿಸಿರುವುದಾಗಿ ಹಿರಿಯ ಜನತಾ ಕಾರ್ಯಕರ್ತ ಎ. ಬಿ. ವಾಸಪ್ಪ ತಿಳಿಸಿದ್ದಾರೆ.

ಪ್ರತಿ ತಾಲೂಕಿನಿಂದ ಐದೈದು ಜನರು ದಳದಲ್ಲಿದ್ದು ಅವರುಗಳ ಹೆಸರುಗಳನ್ನು ಬಹಿರಂಗಪಡಿಸಲು ಅವರು ಇಷ್ಟಪಡಲಿಲ್ಲ.

## ಪಿಯುಸಿ: ಕೊಪ್ಪದ ಕಾ|| ಕಾಲೇಜಲ್ಲೂ ವಿದ್ಯಾರ್ಥಿನಿಯರ ಮೇಲುಗೈ

ಕೊಪ್ಪ: ಇಲ್ಲಿನ ಸರ್ಕಾರಿ ಕಿರಿಯ ಕಾಲೇಜಿನಲ್ಲಿ ಪಿ.ಯು.ಸಿ. ಪರೀಕ್ಷೆಗೆ ಕುಳಿತಿದ್ದ ೫೬ ಹುಡುಗರು, ೩೩ ಹುಡುಗಿಯರ ಪೈಕಿ ೧೫ ಹುಡುಗರು, ೨೭ ಹುಡುಗಿಯರು ತೇರ್ಗಡೆಯಾಗಿದ್ದಾರೆ. ಶ್ರೇಣಿ: ಹುಡುಗರು— ೨ ಪ್ರಥಮ, ೮ ದ್ವಿತೀಯ; ಹುಡುಗಿಯರು ೫ ಪ್ರಥಮ, ೧೫ ದ್ವಿತೀಯ. ಒಟ್ಟು ಫಲಿತಾಂಶ ಶೇ. ೪೧.೨

# ಪರಿಸರ ಸಂರಕ್ಷಣೆ ಮತ್ತು ನಾವು

ಜೂನ್ ೫ನೇ ತಾರೀಕನ್ನು 'ಪರಿಸರ ಸಂರಕ್ಷಣಾ ದಿನ'ವನ್ನಾಗಿ ವಿಶ್ವಾದ್ಯಂತ ಆಚರಿಸಲಾಯಿತು. ಪರಿಸರ ಸಂರಕ್ಷಣೆಗಾಗಿ ತೀವ್ರ ಕಳಕಳಿಯಿಂದ ಪ್ರಾಮಾಣಿಕವಾಗಿ ಕೆಲಸ ಮಾಡುವ ದೇಶಗಳು ಆ ದಿನವನ್ನು ಒಂದು ಉನ್ನತ ಗುರಿ ಸಾಧಿಸುವ ದಿನವನ್ನಾಗಿ ಆಚರಿಸುತ್ತಿದ್ದರೆ, ನವಿಲುಗಳು ಕುಣಿಯುವಾಗ ಕೆಂಬೂತನ ಹಕ್ಕಿಯೂ ಕುಣಿದಂತೆ ನಮ್ಮ ಈ ದೇಶವೂ ಆ 'ದಿನ'ವನ್ನು ಆಚರಿಸಿಬಿಟ್ಟಿತು!

......... ......... .........

ನಮ್ಮ ಪ್ರಪಂಚದ ಇಡೀ ವಾತಾವರಣ ಅಥವಾ ಪರಿಸರ ಲಾಭಕೋರರ ದುರಾಶೆಯಿಂದ ಇಂದು ಭೀಕರ ರೀತಿಯಲ್ಲಿ ಹದಗೆಡುತ್ತಿದೆ. ಎಲ್ಲೋ ಜನ, ಕಂಡು ಕೇಳದ ಕಾಯಿಲೆಗಳಿಗೆ ತುತ್ತಾಗಿ ಸಾಯುತ್ತಾರೆ; ಇನ್ನೆಲ್ಲೋ ಮೈಯನ್ನೂ ಮರಗಿಡಗಳನ್ನೂ ಸುಡಬಲ್ಲ ಆಮ್ಲಗಳಿಂದ ಕೂಡಿದ 'ಹುಳಿ ಮಳೆ'ಯಾಗುತ್ತದೆ; ಒಂದು ವರ್ಷ ಅನಾವೃಷ್ಟಿ, ಭೀಕರ ಕ್ಷಾಮ—ಮರುವರ್ಷ ಅತಿವೃಷ್ಟಿ, ಹಾಹಾಕಾರ.

ನಮ್ಮಲ್ಲೇ ನೋಡಿ—ಒಂದು ವರ್ಷ ಎಂದೂ ಇಲ್ಲದ ಸುಂಟರ ಗಾಳಿಗೆ ಅಡಿಕೆ ಮರಗಳೆಲ್ಲ ಮಲಗಿದರೆ ಇನ್ನೊಂದು ವರ್ಷ ಜಲಪ್ರಳಯವಾದಂತೆ, ಕೊಳೆ ರೋಗದಿಂದ ತೋಟಗಳೂ ನೆರೆಯಿಂದ ಜಮೀನುಗಳೂ ನಾಶ, ಮತ್ತೊಂದು ವರ್ಷ ಮಳೆಯೇ ಆಗದೇ ಗದ್ದೆ, ತೋಟಗಳೆಲ್ಲ ಸುಟ್ಟು ಉರುಗಿ ಹೋಗುತ್ತಿವೆ. ಇದೆಲ್ಲ ಪರಿಸರ ವಿನಾಶದ ಪರಿಣಾಮಗಳೇ.

ನಮ್ಮ ಹಳ್ಳಿಗಳ, ಪಟ್ಟಣಗಳ ಯುವಜನರಿಗೆ—'ನಿಮ್ಮ ಸಣ್ಣತನ, ಪರಸ್ಪರ ದ್ವೇಷ, ಬೇಜವಾಬ್ದಾರಿ, ಪೋಲಿ ಪ್ರವೃತ್ತಿಗಳನ್ನೆಲ್ಲ ಕಮ್ಮಿ ಮಾಡಿ; ಒಮ್ಮೆ ಸುಂದರ ನವಿಲಾಗಿ ಲಾಸ್ಯವಾಡುತ್ತಿದ್ದು ಇಂದು ಓರಗೆಯ ನವಿಲುಗಳ ಮಧ್ಯೆ ಕೆಂಬೂತನ ಹಕ್ಕಿಯಂತಾಗಿರುವ ನಿಮ್ಮ ಹೆತ್ತದೇಶ ಪುನಃ ನವಿಲಾಗಿ ನಲಿಯುವಂತೆ ಒಂದಿಷ್ಟು ಕೆಲಸ ಮಾಡಿ....' ಎಂದು ಕರೆ ಕೊಡುವುದು ಈ ಲೇಖನದ ಉದ್ದೇಶ.

ಹವಾಮಾನದಲ್ಲಿ ಈಚೆಗೆ ಆಗುತ್ತಿರುವ ಏರುಪೇರುಗಳನ್ನು ಅಧ್ಯಯನ ಮಾಡಿ ಪರಿಹಾರ ಸೂಚಿಸಲು ಕೇಂದ್ರ ಸರ್ಕಾರ ಈಚೆಗೆ ಉನ್ನತ ಮಟ್ಟದ ಸಮಿತಿಯೊಂದನ್ನು ನೇಮಿಸಿದೆ. ಉನ್ನತ ವಿಜ್ಞಾನಿಗಳು, ಪವನ ಶಾಸ್ತ್ರಜ್ಞರು, ಪರಿಸರ ವಿಜ್ಞಾನಿಗಳು, ಕೆಲವು ಇಲಾಖೆಗಳ ಉನ್ನತ ಅಧಿಕಾರಿಗಳು ಮುಂತಾದವರು ಸಮಿತಿಯಲ್ಲಿದ್ದಾರೆ.

ಈಚಿನ ವರ್ಷಗಳಲ್ಲಿ ನಮ್ಮ ದೇಶದಲ್ಲಿ ಹವಾಮಾನ ವಿಪರೀತ ಏರುಪೇರಾಗುತ್ತಿದೆ ನಿಜ. ಆದರೆ ಅದಕ್ಕೆ ಕಾರಣ ಹೆಚ್ಚು ಕಡಿಮೆ ನಮ್ಮ ಕಣ್ಣು ಮುಂದೆಯೇ ಇದೆಯೆನ್ನಬಹುದು: ಸಮಿತಿ ಏನಿದ್ದರೂ ಅದನ್ನು ಅಂಕಿ-ಅಂಶ ಸಹಿತವಾಗಿ ವಿಶದೀಕರಿಸಬಹುದು. ಆದರೆ ಅದು ಸೂಚಿಸುವ ಪರಿಹಾರ ಮಾರ್ಗಗಳನ್ನು ಅನುಷ್ಠಾನಕ್ಕೆ ತರಬಲ್ಲ ನಿಷ್ಠೆ ಮತ್ತು ತಾಕತ್ತು ನಮ್ಮ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಇವೆಯೆ? ಸಂಬಂಧಪಟ್ಟ ಸರ್ಕಾರಿ ಯಂತ್ರ ಅಷ್ಟು ಸಮರ್ಪಕವಾಗಿ ಕೆಲಸ ಮಾಡುತ್ತಿದೆಯೆ? ಹೋಗಲಿ, ಆ ಪರಿಹಾರೋಪಾಯಗಳನ್ನು ಒಪ್ಪಿ, ಅದರಂತೆ ನಡೆಯಲು ನಮ್ಮ ಸಮಾಜವಾದರೂ ಸಿದ್ಧವಿದೆಯೆ? ಎಂಬುವು ಮುಖ್ಯವಾದ ಪ್ರಶ್ನೆಗಳಾಗುತ್ತವೆ.

ಪ್ರಕೃತಿಯಲ್ಲಿ ಪ್ರಾಣಿ-ಪಕ್ಷಿಗಳು, ಅರಣ್ಯಗಳು, ಹೊಳೆ-ಹಳ್ಳಗಳು, ಮನುಷ್ಯ—ಆವನ ಸಾಗುವಳಿ ಭೂಮಿ ಮುಂತಾದುವುಗಳ ನಡುವೆ (ತಕ್ಕಡಿಯಲ್ಲಿ ತೂಕಹಾಕಿದಂತೆ) ಒಂದು ಸಮತೋಲನವಿರುತ್ತದೆ; ಹವಾಮಾನ ಈ ಸಮತೋಲನದ ಮೇಲೆ ಅವಲಂಬಿಸಿರುತ್ತದೆ; ಈ ಸಮತೂಕ ಮುರಿದಾಗ ಅಥವಾ ವ್ಯತ್ಯಾಸವಾದಾಗ ಹವಾಮಾನವೂ ಏರುಪೇರಾಗುತ್ತದೆ—ಎಂಬ ವಿಷಯಗಳು ನಮಗೆಲ್ಲ ಈಗಾಗಲೇ ಗೊತ್ತು. ಮನುಷ್ಯ ಮತ್ತು ಅವನ ಚಟುವಟಿಕೆಗಳಿಗೂ ಪ್ರಕೃತಿಯ ಇತರ ಅಂಗಗಳಿಗೂ ನಡುವಿನ ಸಮತೋಲನ ವಿಪರೀತವಾಗಿ ವ್ಯತ್ಯಾಸವಾಗುತ್ತಿರುವುದು ನಮಗೆಲ್ಲರಿಗೂ ಕಾಣುತ್ತಿದ್ದು ಇದೇ ಹವಾಮಾನದ ಏರುಪೇರಿಗೂ ಮೂಲ ಕಾರಣ ಎಂದು ಅರ್ಥ ಮಾಡಿಕೊಳ್ಳಲು ದೊಡ್ಡ ಪಾಂಡಿತ್ಯವೇನೂ ಬೇಕಿಲ್ಲ.

### ಮೊದಲ ಅಪರಾಧಿ

ಇಷ್ಟು ವಿಷಯ ಗೊತ್ತಿದ್ದ ಮೇಲೆ, ಈ ವೈಪರೀತ್ಯಗಳುಂಟಾಗಲು ಮೊದಲ ಅಪರಾಧಿ ನಮ್ಮ ಸರ್ಕಾರ ಮತ್ತು ಅದನ್ನು ನಿರ್ದೇಶಿಸುವ ನಮ್ಮ ರಾಜಕಾರಣಿಗಳೇ ಎಂಬುದೂ ಗೊತ್ತಿದ್ದಂತೆಯೇ.

ಆಡಳಿತ ನಡೆಸುವ ಪಕ್ಷಗಳು ಪುನಃ ಅಧಿಕಾರಕ್ಕೆ ಬರುವುದನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಳ್ಳುತ್ತವೆ. ದೂರದೃಷ್ಟಿಯಿಂದ ಇಡೀ ದೇಶದ ಬೆಳವಣಿಗೆಯನ್ನು ಯೋಜಿಸುವ ಉದ್ದೇಶ ಅವುಗಳಿಗಿರುವುದಿಲ್ಲ. ಇದರಿಂದ ನಗರಗಳು, ಊರುಗಳು ಅಸ್ತವ್ಯಸ್ತವಾಗಿ ಬೆಳೆಯುತ್ತವೆ, ಅವರಿಗೆ ದೀಪ, ನೀರು, ಕಟ್ಟಿಗೆ ಮುಂತಾದ ಸೌಲಭ್ಯಗಳ ಬೇಡಿಕೆಯೂ ಹಿಡಿತಕ್ಕೆ ಸಿಗದಾಗುತ್ತದೆ; ಕಾರ್ಖಾನೆಗಳು, ಕುಲುಮೆಗಳು ಬೆಳೆಯುತ್ತವೆ—ಆದರೆ ಅವು ಪರಿಸರ ಸಂರಕ್ಷಣೆ ಬಗೆಗಿನ ನಿಯಮಗಳನ್ನು ಸ್ವೇಚ್ಛೆಯಾಗಿ ಉಲ್ಲಂಘಿಸುತ್ತವೆ—ಧೂಳು, ಹೊಗೆ, ಕೊಳೆ, ವಿಷ ಪದಾರ್ಥಗಳೆಲ್ಲ ಗಾಳಿಯನ್ನೂ ನೀರನ್ನೂ ವಾತಾವರಣವನ್ನೂ ಸೇರುತ್ತವೆ;

ಸಾಗುವಳಿ ಭೂಮಿಯ ಯೋಗ್ಯ ಹಂಚಿಕೆಯಾಗದೆ, ಎಲ್ಲರೂ ಹೊಸದಾಗಿ ಜಮೀನು ಕಡಿಯಲು ಹುಡುಕುತ್ತಾರೆ; ಲಾಭ ಬಡುಕತನಕ್ಕೆ ಮಿತಿಯಿಲ್ಲವಾಗಿ, ಸುಖ ಲೋಲುಪತೆಯೇ ಆದರ್ಶವಾಗಿ ಇದ್ದ ಸಂಪನ್ಮೂಲಗಳನ್ನೆಲ್ಲ ಭಾರಿ ಕಳ್ಳರು, ಮೋಸಗಾರರು, ದೋಚುತ್ತಾರೆ ;

ಜನರ ಸಮಸ್ಯೆಗಳು ಕುತ್ತಿಗೆಗೆ ಬಂದು ತಕ್ಷಣದ ಮಾರ್ಗೋಪಾಯವನ್ನು ಮಾತ್ರ ಸರ್ಕಾರಗಳು ಹುಡುಕುತ್ತವೆ; ಇಡಿ ಇಡೀ ತಾಲ್ಲೂಕು, ಜಿಲ್ಲೆಗಳನ್ನೇ ಮುಳುಗಿಸಬಲ್ಲ, ಬೆಂಗಾಡಾಗಿಸಬಲ್ಲ ಯೋಜನೆಗಳು ಅಪಾರ ವೆಚ್ಚದಲ್ಲಿ ಕಾರ್ಯಗತವಾಗುತ್ತವೆ; ಪ್ರಾಣಿ-ಪಕ್ಷಿ ಸಂಕುಲ ನಾಶವಾಗತೊಡಗುತ್ತವೆ; ಈ ದರಿದ್ರಗೆಟ್ಟ ಪಕ್ಷಗಳಿಗೆ, ರಾಜಕಾರಣಿಗಳಿಗೆ ದಿಢೀರ್ ಹಣ ಒದಗಿಸುವ ಉಪಾಯವಾಗಿ ಸಾವಿರಾರು ಎಕರೆ ಕಾಡು ಕಡಿಯಲು ವರ್ಷಾನುಗಟ್ಟಲೆ ಗುತ್ತಿಗೆ ಕೊಡುವುದು, ದೇಶಕ್ಕೆ ವಿದೇಶಿ ವಿನಿಮಯ ಗಳಿಸುತ್ತವೆಂಬ ಸೋಗಿನಲ್ಲಿ ಶ್ರೀಮಂತರಿಗೆ ಅಪಾರ ಲಾಭ ತರುವ ಕಾಫಿ, ಟೀ, ರಬ್ಬರ್, ಏಲಕ್ಕಿ ಮುಂತಾದ ಪ್ಲಾಂಟೇಶನ್ನುಗಳಿಗೆ ಮಿತಿ ಮೀರಿ ಅವಕಾಶ, ಶ್ರೀಮಂತರಿಗೂ, ಬಿರ್ಲಾನಂಥ ಕೋಟ್ಯಾಧೀಶ ಉದ್ಯಮಿಗಳಿಗೂ ಅನುಕೂಲಕ್ಕಾಗಿ, ಇದ್ದ ಕಾಡು ಕಡಿದು ಸಾಗುವಾನಿ, ನೀಲಗಿರಿ, ಮುಂತಾದ ಪ್ಲಾಂಟೇಶನ್ ಬೆಳೆಸುವುದು ಮುಂತಾದ ವಿನಾಶಕರ ನೀತಿಗಳು ಸರ್ಕಾರದಿಂದಲೇ ರೂಪುಗೊಳ್ಳುತ್ತವೆ. (೩ನೇ ಪುಟಕ್ಕೆ)

# ಸ್ವತಂತ್ರ ಭಾರತದ ಸಂತುಷ್ಟ ರೈತ!

—ಇದು ನಮ್ಮ ದೇಶದ ರೈತನ ಬಗೆಗೆ ಪಟ್ಟ ಅಭಿಪ್ರಾಯವಲ್ಲ ಅಥವಾ ಹೊರದೇಶದವರ ಹೇಳಿಕೆಯಲ್ಲ. ಇದು ನಮ್ಮ ಸರ್ಕಾರ ತನ್ನ ರೈತನ ಬಗ್ಗೆ ತನ್ನಷ್ಟಕ್ಕೆ ಹೊಡಕೊಳ್ಳುತ್ತಿರುವ ಒಂದು ಬೊಗಳೆ ಹಾಗೂ ತನ್ನ ಸ್ಥಿತಿಯನ್ನು ಅರಿತುಕೊಂಡಿರುವ ರೈತ ತನಗೇ ತಾನು ಉದ್ಗರಿಸಿಕೊಳ್ಳುತ್ತಿರುವ ವ್ಯಂಗ್ಯ!

### ಇತರರ ಕಲ್ಪನೆಯಲ್ಲಿ....

ಸರ್ಕಾರ, ಅಧಿಕಾರವರ್ಗ, ವ್ಯಾಪಾರಿಗಳು, ಇತರೆ ನೌಕರರ ದೃಷ್ಟಿಯಲ್ಲಿ 'ರೈತನದು ಸುಖೀಜೀವನ'. —ಹೌದು, ಅವರಿಗೆಲ್ಲ ಕಾಣುವಂತೆ ರೈತನಿಗೇನು ಕೊರತೆ? ಮನೆ ಜಾಗಕ್ಕೆ ಪರದಾಡಬೇಕಿಲ್ಲ. ನಾಟಾ, ಕಟ್ಟಿಗೆ ಬೇಕಷ್ಟು ಸಿಗುತ್ತವೆ (ಅದೂ ಪುಕ್ಕಟೆ) ಬೆಳೆಯುವವನೇ ಅವನಾದ್ದರಿಂದ ಊಟಕ್ಕೆ ಹೇಗೂ ಕೊರತೆ ಇಲ್ಲ. ಒಟ್ಟಾರೆ ಸಮೃದ್ಧಿ! ರೈತನನ್ನು ಸುಖೀಜೀವಿ ಎನ್ನಲು ಇನ್ನೇನು ಬೇಕು?

ನಮ್ಮನ್ನಾಳುವವರು ರೈತನಿಗಾಗಿ ಮಾಡಿಕೊಡುತ್ತಿರುವ ಅನುಕೂಲತೆಗಳು, ಕಾನೂನು ಕಟ್ಟಳೆಗಳು ಬೇರೆ ಸಾಲುಸಾಲು. ಆದರದು ಭಾಷಣ, ರೇಡಿಯೋ, ಸುದ್ದಿ ಪತ್ರಿಕೆಗಳಲ್ಲಿ ಮಾತ್ರ; ಎಷ್ಟೋ ಅನುಕೂಲತೆಗಳು ರೈತನಿಗೆ 'ಎಟುಕದ ಹಣ್ಣು'; ರೈತನ ಬಗ್ಗೆ ಕಳಕಳಿ ಇವರ ಭಾಷಣಗಳಲ್ಲಿ ಮಾತ್ರ—ಎಂಬುದು ಅವರಿಗೆ ತಿಳಿಯಲು ಪುರುಸೊತ್ತಿದೆ ಅವರಿಗೆ? ರೈತನ ಬಗ್ಗೆ ಪ್ರಾಮಾಣಿಕ ಕಳಕಳಿ ಇರುವುದೆಂದರೆ ರೈತನಿಗೆ ಮಾತ್ರ!

### ....ಪರದೇಶಿ!

ಸರ್ಕಾರಿ ಅಧಿಕಾರಿಗಳ ದೃಷ್ಟಿಯಲ್ಲಿ ಬಹುಶಃ ರೈತ ಪರದೇಶಿ. ಸರ್ಕಾರಿ ಕಛೇರಿಗಳಲ್ಲಿ ತನ್ನ ಕೆಲಸಗಳನ್ನು ಮಾಡಿಸಿಕೊಳ್ಳಲು ಪಡುವ ಕಷ್ಟ ಹೇಳಲಸದಳ. ಸ್ವಾತಂತ್ರ್ಯಪೂರ್ವದಲ್ಲಿ ಸರ್ಕಾರಿ ಕಛೇರಿಗಳಲ್ಲಿ ಪರದೇಶೀ ಅಧಿಕಾರಿಗಳ ಮುಂದೆ ತಲೆ ತಗ್ಗಿಸಿ ನಿಲ್ಲಬೇಕಾಗಿತ್ತು. ಈಗ ಸ್ವದೇಶಿ ಅಧಿಕಾರಿಗಳೆದುರೇ ಪರದೇಶಿಯಂತೆ ತಲೆ ತಗ್ಗಿಸಿಕೊಂಡು 'ಛೀ, ಥೂ' ಅನ್ನಿಸಿಕೊಳ್ಳಬೇಕಾಗಿದೆ. ಪುಟ್ಟ ಕೆಲಸಕ್ಕೆ ಹತ್ತಾರು ಬಾರಿ ನಾಯಿಯಂತೆ ಅಲೆಯಬೇಕಾಗಿದೆ.

ಬಿ. ಎಂ. ವೆಂಕಟೇಶ್, ಕೂಡಿಗೆ

ಈ ಸ್ವಕೀಯರಿಗಿಂತ ಅಂದಿನ ಪರಕೀಯರೇ ರೈತರಿಗೆ ಎಷ್ಟೋ ವಾಸಿ ಎಂದು ರೈತನಿಗೆ ಅನ್ನಿಸಿದರೆ ಅದು ರೈತನ ತಪ್ಪೆ?

ವ್ಯವಸಾಯಕ್ಕೆ ಅಗತ್ಯವಾಗಿರುವ ಕಬ್ಬಿಣದ ಉಪಕರಣಗಳು, ಜಾನುವಾರುಗಳು, ರಸಗೊಬ್ಬರಗಳು ರೈತನ ಜೀವನಾಡಿ. ಅವುಗಳ ಬೆಲೆ ಈಗ ಗಗನದೆಡೆಗೆ ಸಾಗಿದೆ. ಕಂಟ್ರಾಕ್ಟರರ, ಶ್ರೀಮಂತರ ಕಪ್ಪುಹಣ ಕಸಿಯುತ್ತೇನೆಂಬ ಭ್ರಮೆಯಿಂದ ಕಬ್ಬಿಣವಸ್ತುಗಳ ಮೇಲೆ ಹೇರುವ ತೆರಿಗೆ ಮೂಲೆಯ ರೈತನ ಬಳಿಗೆ ಬರುವ ಹೊತ್ತಿಗೆ ಒಂದಕ್ಕೆ ಹತ್ತಾಗಿ ವಸ್ತು ಸಣ್ಣದಾದರೂ ಬೆಲೆ ದೊಡ್ಡದಾಗಿರುತ್ತದೆ. ಗೇಣಿದಾರನೀಗ ಖಾತೆದಾರನಾಗಿದ್ದರೂ ಆದರ ಹಿಂದಿರುವ ಕಂದಾಯ ಪರಿಕೆ, ನೂರೆಂಟು ಟ್ಯಾಕ್ಸ್, ಸೆಸ್ಸುಗಳು ವರ್ಷಕ್ಕೂ ಏರುತ್ತಲೇ ಇವೆ. ಆದರೂ ಬೆಳೆಗೆ ತಕ್ಕ ಬೆಲೆ ಇಲ್ಲ.

### ರೈತರ ಸ್ಥಾನಮಾನ

ರೈತನಿಗೆ ಸ್ಥಾನವಿದ್ದರಲ್ಲವೇ ಮಾನದ ಪ್ರಶ್ನೆ!? ರೈತ ಒಂದು ಓಟಿನ ಬ್ಯಾಂಕ್ ಆಗಿರುವುದರಿಂದ ಇಷ್ಟಾದರೂ ಬದುಕುತ್ತಿದ್ದಾನೆ. ಚುನಾವಣಾಪೂರ್ವದ ಕೆಲದಿನಗಳಲ್ಲಿ ರೈತನಿಗೆ ಒಳ್ಳೆಯ ಸ್ಥಾನಮಾನ. ಆಗ ಎಲ್ಲೆಲ್ಲೂ ಅವನ ಕಷ್ಟದ ಬಗ್ಗೆ (ಮೊಸಳೆ) ಕಣ್ಣೀರು. ನಂತರ ಅವನ ನೆನಪಾಗುವುದು ಮುಂದಿನ ಚುನಾವಣೆಯಲ್ಲಿ!

### ಜೀವನಾಡಿಗೇ ಕುತ್ತು

ಮಳೆಯಲ್ಲಿ ನೆನೆದು ಗದ್ದೆ ಕೆಸರಲ್ಲಿ ಹೆಣಗುವ ರೈತನಿಗೆ ಮೈಯೊಣಗಿಸಿಕೊಳ್ಳಲು ಕಟ್ಟಿಗೆ ಅತ್ಯಾವಶ್ಯಕ ಆದರೆ ಕೋಟಿಗಟ್ಟಲೆ ಬೆಲೆಯ ನಾಟಾ, ಕಟ್ಟಿಗೆ ಕದ್ದು ಸಾಗಿಸುತ್ತಿದ್ದರೂ ಕಂಡರೂ ಕಾಣದಂತೆ ತೆಪ್ಪಗಿರುವ ಅರಣ್ಯ(ಭ)ಕ್ಷಕರು ತುಂಡು ಕಟ್ಟಿಗೆ ಕಡಿದರೆ ಬಡ ರೈತನನ್ನು ಕಾಡುತ್ತಾರೆ. ಇವು ಕಲ್ಲಸಾಧ್ಯ ಆತೆರುವ ಸರಕಾರ ರೈತರ ಬಂಧು!

### ಕೃಷಿತೋ ನಾಸ್ತಿ ದುರ್ಭಿಕ್ಷಂ?

ದೇಶಕ್ಕೆ ಅನ್ನ ಒದಗಿಸುವ ರೈತ ಹತ್ತು ತರದಲ್ಲಿ ತೆರಬೇಕಾಗಿರುವ ಖರ್ಚುಗಳಿಗೆ ಬರುವ ಒಂದೇ ಒಂದು ಮಾರ್ಗದ ಆದಾಯವನ್ನು ಪಡೆಯಲಿಕ್ಕಾದರೂ ಕಾಳಸಂತೆಯಲ್ಲಿ ಅಗ್ಗದ ಖದೀಮರ ಕೈಯಲ್ಲಿ ಅನವರತ ಹೋರಾಡಬೇಕು (ಸರ್ಕಾರದ ಲೆವಿನೀತಿಯ ಕಾರಣದಿಂದ ಒಟ್ಟಾರೆ ಅವನು ದುಡಿದದ್ದು ಅವನು ಪಡೆಯುವುದಕ್ಕೂ ಹೋರಾಡಬೇಕಾದ ಸ್ಥಿತಿ ರೈತನದೆಂದರೆ ಎಂಥ ಶೋಚನೀಯ? 'ಕೃಷಿತೋ ನಾಸ್ತಿ ದುರ್ಭಿಕ್ಷಂ' ಎಂಬ ಹಿರಿಯರ ಸೂಕ್ತಿ ಈಗ ಅರ್ಥಹೀನ ಎನ್ನಿಸುವುದಿಲ್ಲವೇ?

## ಓದುಗರ ಪತ್ರಗಳು

# "ಪಾನ ನಿರೋಧ ಜಾರಿಗೆ ತರಲು ಮಹಿಳಾ ಸಂಘಗಳು ಹೋರಾಡಬೇಕು"

ಮಾನ್ಯರೆ,

ಮದ್ಯಪಾನದಿಂದ ಆಗುವ ಅನಾಹುತ ಗಳ ಬಗ್ಗೆ ನಮ್ಮ ಸರ್ಕಾರ ಏಕೆ ಗಮನ ಹರಿಸುತ್ತಿಲ್ಲವೋ. ಬಡವರ ರಕ್ತ ಹೀರುವ ಮದ್ಯಪಾನದಿಂದ ಸರ್ಕಾರಕ್ಕೆ ಲಾಭವೇನೋ ಹೌದು. ಆದರೆ ಸರ್ಕಾರ ತನ್ನ ಲಾಭ ನೋಡಿಕೊಂಡು ಎಷ್ಟೋ ಕುಟುಂಬಗಳು ನಾಶವಾಗುವುದರ ಬಗ್ಗೆ ಕಣ್ಣು ಮುಚ್ಚಿಕೊಳ್ಳುವುದು ಸರಿಯೆ?

ಅದರಲ್ಲೂ ಈ ಚಟ ಬಡವರ ಪಾಲಿಗೆ ಬಹಳ ಮಾರಕವಾಗಿದೆ. ಪ್ರತಿ ನಿತ್ಯ ಕೂಲಿಗಾರನೊಬ್ಬನ ದುಡಿಮೆಯ ಮುಕ್ಕಾಲು ಭಾಗಕ್ಕಿಂತ ಹೆಚ್ಚು ಶರಾಬು, ಶೇಂದಿಗಳಿಗೆ ಹೋಗುತ್ತದೆ. ಇದರಿಂದ ಆತ ಹೊಲಮನೆ ಬಗ್ಗೆಯಾಗಲಿ, ಸಂಸಾರ-ಹೆಂಡತಿ-ಮಕ್ಕಳ ಬಗೆಗಾಗಲಿ ಗಮನ ಕೊಡದೆ ಕುಡಿದ ಅಮಲಿನಲ್ಲಿ ಎಲ್ಲೆಲ್ಲೋ ಯಾರ್ಯಾರ ಹತ್ತಿರವೋ ಜಗಳ ಕಾದುಕೊಂಡು ಎಲ್ಲೋ ಬಿದ್ದು-ಎದ್ದು ಮಾಡಿಕೊಂಡಿರುತ್ತಾನೆ.

ಸಾರ್ವಜನಿಕ ಸಂಘ-ಸಂಸ್ಥೆಗಳು ಪಾನ ನಿರೋಧದ ಬಗ್ಗೆ ತೀವ್ರವಾಗಿ ಶ್ರಮಿಸಬೇಕು. ಅದರಲ್ಲೂ ಈ ಚಟದಿಂದ ಅಂತಿಮವಾಗಿ ಹೆಚ್ಚಿನ ಹೊಡೆತ, ಹೊರೆ ಬೀಳುವುದು ಮಹಿಳೆಯರಿಗಾದ್ದರಿಂದ ಮಹಿಳಾ ಸಂಘಗಳು ಇದರ ವಿರುದ್ಧ ಹೋರಾಡಬೇಕೆಂದು ನನ್ನ ಅಭಿಪ್ರಾಯ. ನಮ್ಮ ಈಗಿನ ಸರ್ಕಾರವಾದರೂ ಪಾನ ನಿರೋಧ ಜಾರಿಗೆ ತರುವ ದಿಕ್ಕಿನಲ್ಲಿ ಕೆಲಸ ಮಾಡಲಿ, ಸ್ವತಃ ಪಾನ ನಿರೋಧಿಗಳಾದ ನಮ್ಮ ಶಾಸಕರೂ ಈ ಬಗ್ಗೆ ಗಮನ ಹರಿಸಲಿ ಎಂದು ಆಶಿಸುತ್ತೇನೆ.

—ಪೇಟ್. ಟಿ. ಕೃಷ್ಣಮೂರ್ತಿ, ರೈತಸಂಘದ ಕಾರ್ಯದರ್ಶಿ, ಹಿರೇಕೊಡಿಗೆ.

**ಸಂಪಾದಕನ ಟಿಪ್ಪಣಿ:**

ಪಾನ ನಿರೋಧ ಸಾಧ್ಯವಿಲ್ಲವೆಂದು ತಜ್ಞರು ಮಟ್ಟಿಗೆ ಎಲ್ಲರೂ ಕೈ ಬಿಟ್ಟಿರುವಂತೆ ಕಾಣುತ್ತಿರುವಾಗ (ಇದರಲ್ಲಿ ನಮ್ಮ ಸರ್ಕಾರಗಳೇ (೪ ನೇ ಪುಟಕ್ಕೆ)

# "ನಮ್ಮ ಕಿವಿಗೆ ಕಾದ ಸೀಸ ಹುಯ್ತಾರಾ?"

ಈಚೆಗೆ ಬೆಂಗಳೂರಿನಲ್ಲಿ ನಡೆದ ಬ್ರಾಹ್ಮಣ ಸಮ್ಮೇಳನದಲ್ಲಿ ನಮ್ಮ ಶೃಂಗೇರಿ ಜಗದ್ಗುರುಗಳು ಮಾತಾಡುತ್ತ ಮನುಧರ್ಮಶಾಸ್ತ್ರದಲ್ಲಿ ಹೇಳಿರುವುದರಿಂದ ಬ್ರಾಹ್ಮಣರ ದೊಡ್ಡಸ್ಥಿಕೆ ಎಂದಿದ್ದಾರೆ. ಅನಂತರ ಅವರು "ಧರ್ಮಶಾಸ್ತ್ರವನ್ನು ತಿದ್ದುವ ಅಧಿಕಾರವನ್ನು ಶಂಕರಾಚಾರ್ಯರು ನಮಗೆ ನೀಡಿಲ್ಲ. ಅದನ್ನು ಅನುಷ್ಠಾನ ಮಾಡಿಸಲು ಮಾತ್ರ ಅವಕಾಶ ಕೊಟ್ಟಿದ್ದಾರೆ" ಎಂದು ಹೇಳಿದ್ದಾರೆ. ಹೀಗೆಂದು ಪತ್ರಿಕೆಗಳಲ್ಲಿ ಬಂದಿದೆ.

ಅಸ್ಪೃಶ್ಯರು ವಿದ್ಯೆ ಕಲಿಯ ಕೂಡದು, ಹಣಗಳಿಸ ಕೂಡದು, ಆಸ್ತಿ ಹೊಂದ ಕೂಡದು ಉತ್ತಮರ ಎದುರು ತಲೆ ಎತ್ತಿ ನಡೆಯಕೂಡದು....." ಎಂದೆಲ್ಲ ಮನುಧರ್ಮಶಾಸ್ತ್ರ ಮತ್ತಿತರ ಧರ್ಮ ಶಾಸ್ತ್ರಗಳಲ್ಲಿ ಬರೆದಿದೆಯಂತೆ. ಹಾಗೇನಾದರೂ ಅವರು ಮಾಡಿದಲ್ಲಿ "ಅವರ ಕಣ್ಣು ಕೀಳಬೇಕು, ನಾಲಿಗೆ ಕತ್ತರಿಸಬೇಕು, ಕಿವಿಗೆ ಕಾದ ಸೀಸ ಹುಯ್ಯಬೇಕು....." ಎಂದೆಲ್ಲ ಶಿಕ್ಷೆಯನ್ನೂ ಹೇಳಲಾಗಿದೆಯಂತೆ. ಹೀಗೆಂದು ಧರ್ಮಶಾಸ್ತ್ರ ಓದಿದವರು ನಮಗೆ ಹೇಳುತ್ತಾರೆ.

ನಾವುಗಳು ಶಾಲೆಗೆ ಹೋಗಲು ಆಗದಿದ್ದರೂ ಪತ್ರಿಕೆಗಳನ್ನು, ಪುಸ್ತಕಗಳನ್ನು ಓದಿ ಸ್ವಲ್ಪ ಸ್ವಲ್ಪವಾದರೂ ಓದು-ಬರಹ ಕಲಿತಿದ್ದೇವೆ. ನನ್ನ ಮಕ್ಕಳು ಶಾಲೆಗಳಿಗೆ ವಿದ್ಯೆ ಕಲಿಯಲು ಹೋಗುತ್ತಿದ್ದಾರೆ. ನಾವು ನಮ್ಮ ಪೂರ್ವಿಕರಂತೆ ಬಿಟ್ಟಿಯಾಗಿಯೋ ಗುಲಾಮರಾಗಿಯೋ ಕೆಲಸ ಮಾಡದೆ, ಮಾಡಿದ ಕೆಲಸಕ್ಕೆ ಕೂಲಿ ಕೇಳಿ ಪಡೆದು ಕೊಳ್ಳುತ್ತೇವೆ. ದರ್ಖಾಸ್ತು ಮಾಡಿ ಜಮೀನು ಹೊಂದಲು ಪ್ರಯತ್ನಿಸುತ್ತಿದ್ದೇವೆ.

ಈಗ ಧರ್ಮದ ಅನುಷ್ಠಾನ ಮಾಡಿಸಬೇಕೆಂದರೆ ನಮಗೆಲ್ಲ ಧರ್ಮ ಶಾಸ್ತ್ರದಲ್ಲಿ ಹೇಳಿರುವಂತೆ ಕಿವಿಗೆ ಕಾದಸೀಸ ಹುಯ್ದು, ನಾಲಿಗೆ ಕತ್ತರಿಸಿ, ಕಣ್ಣು ಕಿತ್ತು..... ಎಲ್ಲ ಮಾಡ್ತಾರಾ ಸ್ವಾಮಿ?

—ಹೊಲೇರ ಸಿದ್ದ, ಶೃಂಗೇರಿ.

# ಗ್ರಾಮ ಪಂಚಾಯ್ತಿಗಳ ಮರು ವಿಂಗಡಣೆ ಬಗ್ಗೆ ಒಂದು ಅಭಿಪ್ರಾಯ

ಈಗಿನ ಸರ್ಕಾರ ಗ್ರಾಮ ಸ್ವರಾಜ್ಯದ ದಿಕ್ಕಿನಲ್ಲಿ ಕ್ರಮ ಕೆಗೆದುಕೊಳ್ಳಲು ಉದ್ದೇಶಿಸಿರುವುದು ಸ್ವಾಗತಾರ್ಹ. ಆದರೆ ಗ್ರಾಮ ಪಂಚಾಯ್ತಿಗಳ ಮರು ವಿಂಗಡಣೆಯಲ್ಲಿ ಗಣಿಂದ ೨೦ ಸಾವಿರ ಜನಸಂಖ್ಯೆಗೆ ಒಂದು ಪಂಚಾಯ್ತಿ ರಚಿಸಲು ಉದ್ದೇಶಿಸಿರುವುದು ಮಲೆನಾಡಿಗೆ ಸರಿ ಹೊಂದುವುದಿಲ್ಲ. ವಿರಳವಾದ ಜನಸಂಖ್ಯೆಯ ಜೊತೆಗೆ, ಊರುಗಳ ಕ್ಕೂ ಹಳ್ಳ-ಹೊಳೆ-ಗುಡ್ಡ ಗಾಡಿನ ಈ ಪರಿಸರದಲ್ಲಿ ಸಂಪರ್ಕ ರಸ್ತೆ-ಸೇತುವೆಗಳು ಸರಿಯಿಲ್ಲದೆ ಮೇಲ್ಕಂಡಂತೆ ಪಂಚಾಯ್ತಿಗಳನ್ನು ವಿಭಾಗಿಸಿದರೆ ಕೆಲವು ಪ್ರದೇಶಗಳು ವಿಪರೀತ ತೊಂದರೆಗೆ ಸಿಕ್ಕುತ್ತವೆ.

ಆದ್ದರಿಂದ ಈ ಪ್ರದೇಶದಲ್ಲಿ ಕನಿಷ್ಠ ೫ ಸಾವಿರ ಜನ ಸಂಖ್ಯೆಗೆ ಒಂದಾದರೂ ಪಂಚಾಯ್ತಿಯಿರಬೇಕು. ಹಾಗಿಲ್ಲದೆ ಮೇಲಿನ ನಿಬಂಧನೆಯನ್ನೇ ಕಾರ್ಯರೂಪಕ್ಕೆ ತರಲು ಯತ್ನಿಸಿದರೆ ಸರ್ಕಾರ ಮತ್ತು ಶಾಸಕರು ಮಲೆನಾಡಿನ ಗ್ರಾಮಗಳಿಂದ ತೀವ್ರ ಪ್ರತಿಭಟನೆಯನ್ನು ಎದುರಿಸಬೇಕಾಗುತ್ತದೆಂದು ಎಚ್ಚರಿಸಬೇಕಾಗಿದೆ.

—ಕೆ. ಚಂದ್ರಶೇಖರ ಜೋಯಿಸ್, ಭಾರತೀಯ ಜನತಾಪಕ್ಷದ ಬೇಗಾರ್ ಕೊಡಿಗೆ ಪಂಚಾಯ್ತಿ ಸಮಿತಿಯ ಅಧ್ಯಕ್ಷ.



(೧ನೇ ಪುಟದಿಂದ)

# ಅರಣ್ಯ ಸಂರಕ್ಷಣೆ ಮತ್ತು ನಾವು

### ಸರಕಾರಿ ಯಂತ್ರ

ಇಷ್ಟಾದರೂ, ನಮ್ಮ ಹಿಂದಿನ ಕೆಲವರ ಪ್ರಾಮಾಣಿಕ ಚಿಂತನೆಗಳು, ವಿಶ್ವಸಂಸ್ಥೆಯ ನಿರ್ದೇಶನಗಳು, ಆಗಾಗ್ಗೆ ಹೊಮ್ಮುವ ಜನರ ಬೇಡಿಕೆಗಳು ಅಥವಾ ಪ್ರತಿಭಟನೆಗಳ ಫಲವಾಗಿ ಪರಿಸರ ರಕ್ಷಣೆ ಬಗ್ಗೆ ಹಲವಾರು ಕಾನೂನುಗಳು ಈ ದೇಶದಲ್ಲೂ ರೂಪಿತವಾಗಿವೆ. ಆದರೆ ಅವುಗಳನ್ನು ಅನುಷ್ಠಾನಕ್ಕೆ ತರುವುದಕ್ಕಾಗಿ ಕೋಟ್ಯಾಂತರ ರೂ. ವೆಚ್ಚದಲ್ಲಿ ಕೆಲಸ ಮಾಡುವ ಇಲಾಖೆಗಳೇ ಆ ಕಾನೂನು ಮುರಿಯುವುದಕ್ಕೆ ಮೊದಲ ಪ್ರೇರಣೆಗಳಾಗಿರುವುದೂ ಈ ದೇಶದ ಒಂದು ಸತ್ಯ. "ಯಾವುದೇ ಕಳ್ಳಸಾಗಣೆ ಅಥವಾ ಕಳ್ಳ ವ್ಯವಹಾರ ನಡೆಸಬೇಕಾದರೆ ಸಂಬಂಧಪಟ್ಟ ಅಧಿಕಾರಿಗಳ ಸಹಯೋಗ, ಸಹಕಾರಗಳಿಲ್ಲದಿದ್ದರೆ ಸಾಧ್ಯವೇ ಇಲ್ಲ" ಎಂದು ಕುಖ್ಯಾತ ಕಳ್ಳಸಾಗಣೆದಾರ ಸುಕುರ್ ನರೇನ್ ಬಖಿಯಾ ತನ್ನ ಅಪಾರ ಅನುಭವದಿಂದ ಹೇಳಿದ್ದಾನೆ. ಅಂದರೆ ಎಲ್ಲ ಅರ್ಥವಾಗುತ್ತಿಲ್ಲವೆ?

ಪರಿಸರದ ಬಗ್ಗೆ ಪ್ರಜ್ಞೆಯಾಗಲಿ, ತರಬೇತಿಯಾಗಲಿ, ಜನರ, ದೇಶದ ಸಮಸ್ಯೆಗಳ ಬಗ್ಗೆ ಕಳಕಳಿಯಾಗಲಿ, ಸಾಮಾನ್ಯ ಜನ ಜೀವನದ ಸಂಪರ್ಕವಾಗಲಿ ಇಲ್ಲದ ಅಧಿಕಾರಿ ವರ್ಗ; 'ಹುಚ್ಚು ಮುಂಡೆ ಮದುವೇಲಿ ಉಂಡವನೇ ಜಾಣ' ಎಂಬಂತೆ ಇಂಥ ಸರ್ಕಾರದಲ್ಲಿ ದುಡ್ಡು ಆಸ್ತಿ ಮಾಡುವುದೇ ಅವರ 'ಸೇವೆ'ಯ ಏಕೈಕ ಉದ್ದೇಶ; ಅದರಲ್ಲಿ ಅಲ್ಲೊಬ್ಬ ಇಲ್ಲೊಬ್ಬ ಪ್ರಾಮಾಣಿಕ ಪ್ರೌಢರ ಅಥವಾ ಅಧಿಕಾರಿಯಿದ್ದರೆ ಅವನಿಂದ ಏನೂ ಮಾಡಲಾರದಷ್ಟು ಬಿಗಿಯಾಗಿ ಮೇಲಿನ ಮತ್ತು ಕೆಳಗಿನ ಸಿಬ್ಬಂದಿಯ ಜೇಡರ ಬಲೆ—ಇಂಥ ಪರಿಸ್ಥಿತಿಯಲ್ಲಿ ಎಲ್ಲ ಕಾನೂನುಗಳೂ ಬಡಬಗ್ಗರ ಪಾಲಿಗೆ ಉರುಳಾಗುತ್ತವೆಯೇ ಹೊರತು ಮತ್ತೇನೂ ಸಾಧಿಸುವುದಿಲ್ಲ. ಇವರನ್ನು ಕೇಳುವವರೇ ಇಲ್ಲದಿರುವಾಗ ಅವರೇಕೆ ಪ್ರಾಮಾಣಿಕರಾಗಿರಬೇಕು? ಎಂಬ ಪ್ರಶ್ನೆ ನಮಗೆ ಒಗ್ಗಿ ಹೋಗಿದೆ.

### ಕೇಳಬೇಕಾದವರು

ದೇಶಕ್ಕೆ ನಾಯಕತ್ವ ಕೊಟ್ಟು, ಕಾನೂನು ರಚಿಸುವವರು, ಅದನ್ನು ಕಳ್ಳಕಾಕರು ಮೀರದಂತೆ ನೋಡಿಕೊಳ್ಳುವವರು ಎಲ್ಲರೂ ಕಳ್ಳಕಾಕರ ಜೊತೆ ಸೇರಿ, ನಮ್ಮ ಈ ಪರಿಸರವನ್ನು ಕುಲಗೆಡಿಸಿ ತಮ್ಮ ಸಂಪತ್ತು ವೃದ್ಧಿಸಿಕೊಳ್ಳದಂತೆ ತಡೆಯಬೇಕಾದ್ದು ಈ ಪರಿಸರದಲ್ಲಿ ತಾವೂ ತಮ್ಮ ಸಂತತಿಯೂ ಇನ್ನೂ ನೂರು ಕಾಲ ಬಾಳಬೇಕೆಂದು ಆಸೆ ಪಡುವವರಾದ ಸಾಮಾನ್ಯ ಜನರೇ ಹೊರತು ಇನ್ಯಾರೂ ಅಲ್ಲ. ಆದರೆ ನಮ್ಮ ಜನ ಎಂಥವರೆಂದರೆ ತಾವೂ ಇಂಥವೇ ಮಾರ್ಗಗಳ ಮೂಲಕ ಸಂಪತ್ತು ಗಳಿಸುವ ಕನಸು ಕಾಣುತ್ತ ಅದನ್ನು ಬೆಂಬಲಿಸುವವರು; ಅಕ್ಕಪಕ್ಕ ಯಾರಿಗೆ ಏನು ಆದರೂ ತಲೆ ಕೆಡಿಸಿಕೊಳ್ಳದ ನಿರ್ಲಿಪ್ತರು; ತಮ್ಮ ದೈನಂದಿನ ವ್ಯವಹಾರ ಮತ್ತು ಆವಶ್ಯಕತೆಗಳಲ್ಲಿ ಮಿತಿ, ಹಿತಿತಗಳಿಲ್ಲದೆ, 'ಅಕಸ್ಮಾತ್ ಈ ಕಾನೂನುಗಳು ಸರಿಯಾಗಿ ಜಾರಿಗೆ ಬಂದರೆ ನಮಗೂ ಕಷ್ಟವೇ' ಎಂದು ಯೋಚಿಸುವಂಥವರು—ಇತ್ಯಾದಿ.

### ....ಹೀಗಿದ್ದರೆ?

ಹಾಗಿಲ್ಲದೆ ತಮ್ಮ ತಮ್ಮ ಗ್ರಾಮ, ಹೋಬಳಿ, ತಾಲ್ಲೂಕು ಅಥವಾ ಪಟ್ಟಣದ ಮಟ್ಟಗಳಲ್ಲಾದರೂ ಜನ ಒಟ್ಟಾಗಿ ತಮ್ಮ ಪರಿಸರವನ್ನು ರಕ್ಷಿಸಿ ಕೊಳ್ಳಲು ಪ್ರಯತ್ನಿಸುವುದಾದರೆ? ಕಾಕಪೋಕ ರಾಜಕಾರಣಿಗಳು, ಅಧಿಕಾರಿಗಳು ಮತ್ತು ಪರಿಸರ ವಿನಾಶಿಗಳ ಕೂಟ ಕಾರ್ಯಾಚರಣೆಯಲ್ಲಿ ತೊಡಗಿದಾಗ ಒಟ್ಟಾಗಿ ತಡೆಯುವುದಾದರೆ ? ಒಬ್ಬ ಒಂದು ಅಕ್ರಮ ವನ್ನು ವಿರೋಧಿಸಿ ನಿಂತಾಗ ನೋಡುವ ನಾಲ್ಕು ಜನ 'ನಮಗೇನು' ಎಂದು ಉದಾಶೀನದಿಂದ ಹೊರಟು ಹೋಗದೆ ಆತನಿಗೆ ಬೆಂಬಲವಾಗಿ ನಿಲ್ಲುವುದಾದರೆ? ತಮ್ಮ ಸ್ವಂತ ಜೀವನದಲ್ಲಿ ಶಿಸ್ತು, ಮಿತಿಗಳನ್ನಿಟ್ಟುಕೊಂಡು ಕಾನೂನುಗಳ ಅನುಸರಣೆಗೆ ಪ್ರಾಮಾಣಿಕವಾಗಿ ಕೆಲಸ ಮಾಡತೊಡಗುವವರಾದರೆ? ಜಾತಿ, ಕೋಮು, ಭಾಷೆಗಳ ಅತಿ ಪ್ರೇಮ ಬಿಟ್ಟು, ವಿಶಾಲ ಬುದ್ಧಿ, ಜನ ತಮ್ಮನ್ನು ವಿಭಜಿಸಿ ಸ್ವಾರ್ಥಿಗಳ ಬೇಳೆ ಬೇಯುವಂತೆ ಜಗಳಕ್ಕೆ ಖರ್ಚಾಗುವಂತೆ ಮಾಡದೆ, 'ಇದು ನಮ್ಮೆಲ್ಲರ ದೇಶ. ಇದನ್ನು ಎಲ್ಲರೂ ಸಂಪನ್ನಗೊಳಿಸಿ ಎಲ್ಲರೂ ಸುಖ-ಶಾಂತಿಯಿಂದ ಬಾಳೋಣ' ಎಂಬ ದೊಡ್ಡ ಮನಸ್ಸನ್ನು ಬೆಳೆಸಲು ಪ್ರತಿಯೊಬ್ಬನೂ ಪ್ರಯತ್ನಿಸುವುದಾದರೆ?.....

ಹೀಗಿಲ್ಲ ಆದರೆ, ಅಧಿಕಾರಿಗಳು, ನೌಕರರು ನಿದ್ರೆ, ನಿರ್ಲಕ್ಷ್ಯ, ಸೋಂಗುತನಗಳನ್ನು ಬಿಟ್ಟು ಬಿಗಿಯಾಗಬೇಕಾಗುತ್ತದೆ. ದೇಶದ ನಾಯಕರೂ ಸರ್ಕಾರಗಳೂ ತಮ್ಮ ಆತ್ಮಘಾತಕ ನೀತಿಗಳನ್ನು ತೊರೆಯಬೇಕಾಗುತ್ತದೆ. ಎಂಥದೇ ಸಂದರ್ಭ ಬಂದರೂ, ನಮ್ಮ ಪರಿಸರ ವಿನಾಶಗೊಳ್ಳದೆ ಯಾವ ತೊಂದ್ರೆ ನಮಗೆ ತಂಪು ನೀಡುವ ತಾಯಿ ಮಡಿಲಾಗಿ ಉಳಿಯುತ್ತದೆ.

ಇದು ನಿಜವಾದ ಪ್ರಜಾಪ್ರಭುತ್ವ ಬೇರು ಬಿಟ್ಟಿರುವ ಲಕ್ಷಣ. ಪ್ರಜಾಪ್ರಭುತ್ವ ಇರುವ ಹೊರದೇಶಗಳಲ್ಲಿ ಜನರ ಈ ರೀತಿಯ ನಡವಳಿಕೆಯೇ ಸರ್ಕಾರಗಳು ತಮ್ಮ ಮನಸ್ಸಿಗೆ ಬಂದಂತೆ ಮಾಡದಿರಲು ಬೇಲಿಯಾಗಿ ಕೆಲಸ ಮಾಡುತ್ತಿದೆ. ನಾವು ನಮ್ಮ ನಮ್ಮ ಸುತ್ತಮುತ್ತ ಈ ನಡವಳಿಕೆ ಬೆಳೆಸಲು ಒಪ್ಪಿದರೆ ಎಲ್ಲ ಕಡೇ ಅದೇ ಹಬ್ಬುತ್ತದೆ.

ಇದು ಬರೀ ಕನಸು—ಚಿತ್ರದ ಚಿತ್ರ[illegible] [illegible] ಒಂದಿದು [illegible] ಮುಖ್ಯ [illegible] [illegible] ಕಟ್ಟಿನ ಯೋಜನೆಗೆ ಜನತೆ ಈ ವರ್ಷದಿಂದ ಯತ್ನಿಯಾಗಿ ತೊಡಗಿಕೊಳ್ಳುವ [illegible] ಗೆಯೋಣ ಸ್ವಲ್ಪಕ್ಕೆ ಸಾಕು.

## ಓದುಗರ ಪತ್ರ

### "ಸಣ್ಣ ರೈತರಿಗೆ ಅನುಕೂಲ ಕಲ್ಪಿಸಿ"

ಸರ್ಕಾರ ರೈತರಿಗೆ ಅನುಕೂಲವಾಗಲು ಪ್ರಾಥಮಿಕ ಸಹಕಾರ ಸಂಘಗಳನ್ನು ಸ್ಥಾಪಿಸಿದೆ. ಆದರೆ ಅವು ಸ್ವಾರ್ಥಿ, ಭ್ರಷ್ಟ ರಾಜಕಾರಣಿಗಳ ಕೈಗೆ ಸಿಕ್ಕಿ ನಷ್ಟ ಅನುಭವಿಸುತ್ತಿವೆ. ಸಾಮಾನ್ಯವಾಗಿ ಸಣ್ಣ ರೈತರೆಲ್ಲರೂ ಸಾಲ ಮರುಪಾವತಿ ಮಾಡಿದ್ದರೂ ದೊಡ್ಡ ರೈತರೇ ಉಳಿಸಿರುವುದರಿಂದ ಮರುಪಾವತಿ ಮಾಡಿದವರಿಗೆ ಹಣ ಸುಲಭವಾಗಿ ಸಿಗುತ್ತಿಲ್ಲ. ಆದ್ದರಿಂದ, ವಾಣಿಜ್ಯ ಬ್ಯಾಂಕುಗಳಂತೆ ಇಲ್ಲೂ ಸಹ ಸಾಲ ಚುಕ್ತಾ ಮಾಡಿದವರಿಗೆ ಜೂನ್ ತಿಂಗಳಲ್ಲೇ ಪುನಃ ಸಾಲ ದೊರೆಯುವಂತೆ ಸರ್ಕಾರ ಕ್ರಮ ತೆಗೆದುಕೊಂಡು ಸಣ್ಣ ರೈತರಿಗೆ ಅನುಕೂಲ ಮಾಡಿಕೊಡಬೇಕು.

ಅಲ್ಲದೆ, ಸಾಲದ ಶೇ. ೩೦ ಭಾಗ ರಸಗೊಬ್ಬರ ಸಹ ಜೂನ್ ತಿಂಗಳಲ್ಲೇ (ನಾಟಿ ಮಾಡುವಾಗ) ಸಿಕ್ಕಿದರೆ ಮಾತ್ರ ಉಪಯೋಗ. ಈ ಬಗ್ಗೆ ಕೂಡ ಸರ್ಕಾರ ಕ್ರಮ ತೆಗೆದುಕೊಳ್ಳಲಿ.

—ಕೆ. ಎಸ್. ವೆಂಕಟೇಶ್,
ಕಮ್ಮಾರವಳ್ಳಿ.

### ಮದ್ಯಪಾನ ನಿಷೇಧ.....

(೩ನೇ ಪುಟದಿಂದ)

ಮುಂದೆ) ಅದಕ್ಕೆ ಕಡಿವಾಣ ಹಾಕುವಲ್ಲಿ ಸ್ವಲ್ಪವಾದರೂ ಯಶಸ್ವಿಯಾಗಿರುವವರೆಂದರೆ ಮಹಿಳೆಯರೇ ಎಂದು ಕಾಣುತ್ತದೆ. ಬಯಲುಸೀಮೆಯ ಎಷ್ಟೋ ಕಡೆ ಈಗಲೂ ಸೇಂದಿ-ಸರಾಯಿ ಅಂಗಡಿಗಳನ್ನು ಊರೊಳಗೆ ತೆರೆಯಲು ಬಿಡುವುದಿಲ್ಲ. ಕೆಲವು ಕಡೆ, ಕುಡಿದು ಬಂದು ಊರೊಳಗೆ, ಮನೆಯೊಳಗೆ ಗಲಾಟೆ ಮಾಡಿದರೆ ಊರಿನ 'ಹತ್ತು ಸಮಸ್ತರ, ಪಂಚಾಯತಿಯಲ್ಲಿ ದಂಡ ವಿಧಿಸಿ, ಛೀಮಾರಿ ಹಾಕಲಾಗುತ್ತದೆ. ಇದಕ್ಕೆಲ್ಲ ಮಹಿಳೆಯರದೇ ಪ್ರಭಾವವೆಂದು ಬೇರೆ ಹೇಳಬೇಕಾಗಿಲ್ಲ. ಸೊರಬ ತಾ॥ನಲ್ಲಿ, ಅನಕ್ಷರಸ್ಥ ಕಡು ಬಡವರೇ ಹೆಚ್ಚಾಗಿರುವ ಕುಗ್ರಾಮವೊಂದರಲ್ಲಿ ಹೀಗೆ 'ಹತ್ತು ಸಮಸ್ತರ' ನಿರ್ಬಂಧವನ್ನೂ ಸೋಲಿಸಿ ಊರೊಳಗೆ ಸೇಂದಿ ಅಂಗಡಿ ತೆರೆದಾಗ ಬಡ ಮಹಿಳೆಯರೆಲ್ಲ ಒಟ್ಟು ಸೇರಿ ಗಲಾಟೆ ಮಾಡಿ ಅದನ್ನು ಮುಚ್ಚಿಸಿದ್ದು ನನಗೆ ಗೊತ್ತು.

ಆದರೆ, ಮಹಿಳಾ ಸಂಘಗಳು ಫ್ಯಾಶನ್ ಮತ್ತು ಮೂಢ ನಂಬಿಕೆಗಳ ಆಧಾರದ ಮೇಲಿರುವಷ್ಟು ದಿನ ಈ ಕೆಲಸ ಅವುಗಳಿಂದ ಆಗಲಾರದೇನೋ. —ಸಂಪಾದಕ.



## ಎಸ್ಸೆಸ್ಸೆಲ್ಸಿ ಫಲಿತಾಂಶ: ಎಲ್ಲೆಲ್ಲಿ ಎಷ್ಟೆಷ್ಟು?

ಜಯಪುರ: ೧೯೮೩ರ ಏಪ್ರಿಲ್‌ನಲ್ಲಿ ನಡೆದ ಎಸ್‌ಎಸ್‌ಎಲ್‌ಸಿ. ಪರೀಕ್ಷೆಯಲ್ಲಿ ಇಲ್ಲಿನ ಪ್ರೌಢ ಶಾಲೆಯು ಶೇ. ೬೦ ರಷ್ಟು ಫಲಿತಾಂಶ ಪಡೆದಿದೆ. ಎಂ.ಎಂ.ನಾಗೇಶ ಮತ್ತು ಜೆ. ಉಮಾಕುಮಾರ ಇಬ್ಬರೂ ೪೪೩ ಅಂಕ ಪಡೆದು ಪ್ರಥಮ ಸ್ಥಾನವನ್ನೂ ೪೨೨ ಅಂಕ ಪಡೆದು ಲತಾ ಮಧ್ಯಸ್ಥ ದ್ವಿತೀಯ ಸ್ಥಾನವನ್ನೂ, ೪೦೯ ಅಂಕ ಪಡೆದ ಎನ್.ಎಸ್ ಶೃಂಗೇಶ್ವರ ತೃತೀಯ ಸ್ಥಾನವನ್ನೂ, ಪಡೆದಿದ್ದಾರೆ.

ಪರೀಕ್ಷೆಗೆ ಕುಳಿತ ೭೦ ಮಂದಿ ವಿದ್ಯಾರ್ಥಿಗಳಲ್ಲಿ ೪೨ ವಿದ್ಯಾರ್ಥಿಗಳು ತೇರ್ಗಡೆಯಾಗಿದ್ದು, ಇದರಲ್ಲಿ ೮ಜನ ಪ್ರಥಮ ಸ್ಥಾನವನ್ನು ೧೨ ಮಂದಿ ದ್ವಿತೀಯ ಸ್ಥಾನವನ್ನೂ ಪಡೆದಿದ್ದಾರೆ.

**ಅಭಿನವ ರಾಮಾನಂದ ಪ್ರೌಢಶಾಲೆ, ಕಿಗ್ಗ**

ಪರೀಕ್ಷೆಗೆ ಕುಳಿತವರು —೪೮, ಉತ್ತೀರ್ಣರಾದವರು –೪೩, ಪ್ರಥಮದರ್ಜೆ –೨೨, ದ್ವಿತೀಯ ದರ್ಜೆ — ೧೬, ತಡೆಹಿಡಿಯಲ್ಪಟ್ಟದ್ದು ೧. ಫಲಿತಾಂಶ.ಶೇ. ೯೧

**ಸದ್ಗುರು ಪ್ರೌಢಶಾಲೆ, ಬಸರಿಕಟ್ಟೆ**

ಪರೀಕ್ಷೆಗೆ ಕುಳಿತವರು —೭೮, ಉತ್ತೀರ್ಣರಾದವರು —೫೯, ಪ್ರಥಮ —೧೭, ದ್ವಿತೀಯ—೧೫, ಫಲಿತಾಂಶ ಶೇ. ೭೬. ಶಾಲೆಗೆ ಮೊದಲ ಸ್ಥಾನ—೪೮೨ ಅಂಕ ಪಡೆದ ಜೆ.ಕೆ.ಭಾರತಿ.

**ಕೊಪ್ಪ ಸರ್ಕಾರಿ ಕಿರಿಯ ಕಾಲೇಜು**

ಪರೀಕ್ಷೆಗೆ ಕುಳಿತವರು–೧೧೦, ತೇರ್ಗಡೆ –೩೭, ಪ್ರಥಮ ಶ್ರೇಣಿ–೪, ದ್ವಿತೀಯ–೫, ಫಲಿತಾಂಶ–ಶೇ. ೩೩.೬. ಶಾಲೆಗೆ ಪ್ರಥಮ –ಅಂಬಿಕಾ: ೪೭೩ ಅಂಕ.

**ಕಿರಿಯ ಕಾಲೇಜು, ನ.ರಾ.ಪುರ**

ಪರೀಕ್ಷೆಗೆ ಕುಳಿತವರು–೧೬೦, ತೇರ್ಗಡೆ –೬೫, ಪ್ರಥಮ–೬, ಫಲಿತಾಂಶ–ಶೇ. ೫೦. ಶಾಲೆಗೆ ಪ್ರಥಮ ಸ್ಥಾನ–೩೯೨ ಅಂಕ ಪಡೆದ ಪ್ರತಿಮಾ.

**ಕಾನ್ವೆಂಟ್ ಶಾಲೆ, ಕೊಪ್ಪ**

ಪರೀಕ್ಷೆಗೆ ಕುಳಿತವರು–೬೩, ತೇರ್ಗಡೆ–೪೭, ತಡೆಹಿಡಿಯಲ್ಪಟ್ಟದ್ದು–೩, ಪ್ರಥಮ ೧೪, ದ್ವಿತೀಯ–೧೭; ಫಲಿತಾಂಶ–ಶೇ. ೭೪.೬ ಪ್ರಥಮ ಸ್ಥಾನ–ಹೆಚ್. ಎನ್. ಶೈಲಜಾ: ೪೬೮ ಅಂಕ.

### ರಾಜ್ಯ ರೈತ ಸಂಘದ ತಾ॥ ಸಮಿತಿಗೆ ಆಯ್ಕೆ

ಕಲ್ಲುಗುಡ್ಡೆ: ಕೊಪ್ಪ ತಾ॥ರೈತ ಸಮಿತಿಗೆ ಎಂ. ಎ. ಪರಮೇಶ್ವರಭಟ್ ಮತ್ತು ವೈ. ತಿಮ್ಮಾಚಾರ್ ಅವರುಗಳು ಕಲ್ಲುಗುಡ್ಡೆ ಗ್ರಾಮ ಸಮಿತಿಯಿಂದ ಆಯ್ಕೆಯಾಗಿದ್ದಾರೆ.

### ನಿಧನ

ಜಯಪುರ: ಇಲ್ಲಿ 'ಪ್ರಜಾವಾಣಿ' ಪತ್ರಿಕಾ ಪ್ರತಿನಿಧಿಗಳಾಗಿದ್ದ ಮಾಜಿ ಶಾನುಬೋಗರೂ, ಜಮೀನ್ದಾರರೂ ಆದ ಹೂಗೇಬೈಲು ಕೆ.ಎಸ್. ರಾಮಕೃಷ್ಣಪ್ಪನವರು ಜೂನ್ ೯ ರಂದು ಅವರ ಸ್ವಗೃಹದಲ್ಲಿ ನಿಧನರಾದರು. ಅವರಿಗೆ ೬೫ ವರ್ಷ ವಯಸ್ಸಾಗಿತ್ತು. ಮೃತರು ಪತ್ನಿ, ೭ಜನ ಗಂಡು ಮಕ್ಕಳು ಮತ್ತು ಅಪಾರ ಬಂಧು ಮಿತ್ರರನ್ನು ಅಗಲಿದ್ದಾರೆ.

## ಚಿದಂಬರ್‌ಗೆ ಸನ್ಮಾನ

**ಪಂಚಾಯ್ತಿ ಅಧ್ಯಕ್ಷರುಗಳಿಂದ**

ಕೊಪ್ಪ ತಾ॥ನ ಪಂಚಾಯ್ತಿ ಅಧ್ಯಕ್ಷರು ಮತ್ತು ತಾ.ಅ.ಮಂ. ಅಧಿಕಾರಿ ವರ್ಗದವರಿಂದ ತಾ.ಅ.ಮಂ. ಅಧ್ಯಕ್ಷರಾಗಿದ್ದ ಬಿ. ಜಿ. ಚಿದಂಬರ್ ಅವರಿಗೆ ಜೂನ್ ೮ ರಂದು ನಡೆದ ಸನ್ಮಾನ ಸಮಾರಂಭದ ಅಧ್ಯಕ್ಷತೆಯನ್ನು ಉಪವಿಭಾಗಾಧಿಕಾರಿ ಕೆ. ನರಸಿಂಹಯ್ಯ ವಹಿಸಿದ್ದರು. ನೆನಪಿನ ಕಾಣಿಕೆ ನೀಡಿ ಸನ್ಮಾನಿಸಿದ ಶಾಸಕ ಗೋವಿಂದ ಗೌಡರು ತಾ.ಅ.ಮಂ. ಅಧ್ಯಕ್ಷರಾಗಿ ಚಿದಂಬರ್ ಐದು ವರ್ಷಗಳಿಂದ ನಿರ್ವಹಿಸಿದ ಉತ್ತಮ ಕೆಲಸವನ್ನು ಪ್ರಶಂಸಿಸಿದರು. ಜಿ. ಡಿ. ಪರಮೇಶ್ವರ, ಮಾಗ ಶ್ರೀನಿವಾಸ್, ಕೆ. ಬಾಲಣ್ಣಗೌಡ, ಯು. ವಿ. ಶ್ರೀನಿವಾಸರಾವ್ ಅವರುಗಳೂ ಚಿದಂಬರ್ ಅವರ ಕೆಲಸದ ಬಗ್ಗೆ ಭಾಷಣ ಮಾಡಿದರು. ಕೆ.ಎಸ್. ಕಾಡಪ್ಪಗೌಡ ಸ್ವಾಗತಿಸಿ, ಶಾಂತಾರಾಂ ವಂದಿಸಿದರು.

**ಉತ್ತಮೇಶ್ವರದಲ್ಲಿ**

ಜೂನ್ ೫ ರಂದು ಬೆಳವಿನಕೊಡಿಗೆ ಪಂಚಾಯ್ತಿ ವ್ಯಾಪ್ತಿಯ ಅಭಿಮಾನಿಗಳಿಂದ ಚಿದಂಬರ್‌ಗೆ ಸನ್ಮಾನ ನಡೆಯಿತು. ಹೆಚ್. ಜಿ. ಗೋವಿಂದಗೌಡರು ಶಾಲು ಹೊದಿಸಿ ಸನ್ಮಾನಿಸಿದರು. ಇದಕ್ಕೆ ಮೊದಲು ಪಿ. ಜಿ. ಗುರ್ಜರ್ ಅವರಿಂದ ಮಹಿಳಾ ಸಮಾಜದ ಕಟ್ಟಡದ ಹಾಗೂ ಕೆ. ಬಾಲಣ್ಣಗೌಡ ಅವರಿಂದ ರಂಗಮಂದಿರದ ಉದ್ಘಾಟನೆ ಚಿದಂಬರ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಗೋವಿಂದಗೌಡರು ಮುಖ್ಯ ಅತಿಥಿಗಳಾಗಿದ್ದರು. ವಿ. ರಾಮರಾವ್ ಸ್ವಾಗತಿಸಿ, ಹೆಚ್.ವಿ. ಪ್ರಭಾಕರ್ ವಂದಿಸಿದರು.

## ತೀರ್ಥಹಳ್ಳಿ: ಬೀಡಿ ಕಾರ್ಮಿಕರ ಪಿಕೆಟಿಂಗ್

ತೀರ್ಥಹಳ್ಳಿ: ಸರ್ಕಾರ ೧-೬-೮೩ ರಿಂದ ನಿಗದಿ ಮಾಡಿರುವಂತೆ ಪ್ರತಿ ೧೦೦೦ ಬೀಡಿ ಕಟ್ಟಲು ೮ ರೂ. ೮೦ ಪೈಸೆ ಸಂಬಳ, ಶಿವಮೊಗ್ಗ ಉಪ ವಿಭಾಗ ಕಾರ್ಮಿಕ ಅಧಿಕಾರಿಗಳೆದುರು ಏ. ೬ರಂದು ಏರ್ಪಟ್ಟ ಸಂಧಾನದಜಾರಿ ಮುಂತಾದ ಬೇಡಿಕೆಗಳ ಬಗ್ಗೆ ಒತ್ತಾಯಿಸಲು ಜೂನ್ ೬ರಂದು ನಡೆದ ಸಾಂಕೇತಿಕ ಮುಷ್ಕರ ಮತ್ತು ಪ್ರತಿಭಟನೆಗಳ ಅಂಗವಾಗಿ ಶೃಂಗೇರಿ, ಕೊಪ್ಪ, ತೀರ್ಥಹಳ್ಳಿ, ಹೊಸನಗರ, ತಾ॥ಗಳ ಬೀಡಿ-ಕಾರ್ಮಿಕರು ಇಲ್ಲಿನ ಬೀಡಿಮಾಲಿಕರ ಡಿಪ್ಪೋಗಳ ಮುಂದೆ ಪಿಕೆಟಿಂಗ್ ನಡೆಸಿದರು.

"ದಿ ಒರಜಿನಲ್ ಖಾದರ್ ಬೀಡಿ ಫ್ಯಾಕ್ಟರಿ"ಯ (೩ನೇ ನಂ.ಬೀಡಿ)ಮಾಲೀಕರಾದ ಅಬ್ದುಲ್‌ಖಾದರ್ ರವರು ತೀರ್ಥಹಳ್ಳಿ ವಲಯ ಕಾರ್ಮಿಕ ನಿರೀಕ್ಷಕರ ಸಮ್ಮುಖದಲ್ಲಿ ಕಾರ್ಮಿಕ ಪ್ರತಿನಿಧಿಗಳ ಜೊತೆ ಮಾತುಕತೆ ನಡೆಸಿ, ಮೇಲಿನ ಎರಡೂ ಬೇಡಿಕೆಗಳನ್ನು ತತ್‌ಕ್ಷಣವಿಂದ ಈಡೇರಿಸಿ ಕೊಡಲು ಹಾಗೂ ಕಾರ್ಮಿಕರಿಗೆ ಗುರುತಿನ ಚೀಟಿ, ಲಾಗ್ ಪುಸ್ತಕ, ಪಾಸ್ ಪುಸ್ತಕಗಳನ್ನು ಒದಗಿಸಲು ಒಪ್ಪಿಕೊಂಡಿರುವುದಾಗಿ ಬೀಡಿ ಕಾರ್ಮಿಕ ಸಂಘದ ಕಾರ್ಯದರ್ಶಿ ತಿಳಿಸಿದ್ದಾರೆ.

ಆ ದಿನ ಕಾರ್ಮಿಕ ಸಭೆಗೆ ದೂರದ ಹಳ್ಳಿಗಳಿಂದ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳಾ ಮತ್ತು ಪುರುಷ ಕಾರ್ಮಿಕರಲ್ಲದೆ ಅನೇಕ ಮುಸಲ್ಮಾನ್ ಮಹಿಳೆಯರೂ ಸಹ ತಮ್ಮ ಸಣ್ಣ ಮಕ್ಕಳೊಡನೆ ಬಂದು ಭಾಗವಹಿಸಿದ್ದಾಗಿಯೂ ಅವರು ತಿಳಿಸಿದ್ದಾರೆ.





ಸಂಪಾದಕ, ಮುದ್ರಕ, ಮತ್ತು ಪ್ರಕಾಶಕ: **ಸಿರಿಮನೆ ನಾಗರಾಜ್.**
ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ.